ಒಂದಾಣೆ ಮಾಲೆ. 271

# ಹರಿದಾಸರ ಕೀರ್ತನೆಗಳು

## (ಭಾಗ ೨)



ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯ, ವೆಂಕಣ್ಣ, ವಾಸುದೇವ ಪ್ರಭು, ಶೇಷ ಪ್ರಭು, ರಾಮಕೃಷ್ಣ ಕವಿ, ವಾಸುದೇವ ಶ್ಯಾನುಭಾಗ, ಬಂಗ್ಲೆ ನಾರಾಯಣ ಕಾಮತ್, ಬೋಳಾರ ವಾಸುದೇವಯ್ಯ.
—ಈ ಎಂಟು ಮಂದಿಯ ನುಡಿಮುತ್ತುಗಳ ಸಂಕಲನ

ಸಂಗ್ರಾಹಕ:
ಕೆ. ವೆಂಕಟರಾಯಾಚಾರ್ಯ, ಸುರತ್ಕಲ್ಲು.



1960

ಬೆಲೆ: ಆಣೆ ೧.

ಒಂದಾಣೆ ಮಾಲೆ — ಮಂಗಳೂರು.

## ಅಮೂಲ್ಯ ಧಾರ್ಮಿಕ ಪುಸ್ತಕಗಳು

೧. ಧರ್ಮಶಿಕ್ಷಾ
೨. ಶ್ರೀ ಶಂಕರಾಚಾರ್ಯರ ಜೀವನಚರಿತ್ರೆ
೩. ಶ್ರೀ ಶಂಕರಾಚಾರ್ಯವಿರಚಿತ ಸ್ತೋತ್ರಗಳು
೪. ಅಮರನಾಥ ಯಾತ್ರೆ
೫. ದ್ವಾರಕಾ
೬. ದ್ವಾದಶ ಜ್ಯೋತಿರ್ಲಿಂಗಗಳು
೭. ನಮ್ಮ ವೇದಗಳು
೮. ಶ್ರೀ ಶಂಕರಾಚಾರ್ಯ ವಿರಚಿತ ವಿವೇಕಚೂಡಾಮಣಿ—ಭಾಗ ೧.
೯. ,, ,, ,, —ಭಾಗ ೨.
೧೦. ಶತಪಥ ಬೋಧಾಮೃತ
೧೧. ಕೇನೋಪನಿಷತ್
೧೨. ಈಶಾವಾಸ್ಯೋಪನಿಷತ್
೧೩. ಕೈಲಾಸಮಾನಸ ಸರೋವರ ಯಾತ್ರೆ (ಭಾಗ ೧ ಮತ್ತು ೨).
೧೪. ವೇದಾಂತ ಪ್ರಶ್ನೋತ್ತರೀ
೧೫. ಹಿತೋಪದೇಶ
೧೬. ಅನುಭವ ವೇದಾಂತ— ಈ ಮೇಲಿನ ಅಮೂಲ್ಯ ಧಾರ್ಮಿಕ ಪುಸ್ತಕಗಳು, ಒಂದಾಣೆ ಮಾಲೆಯಲ್ಲಿ ಪ್ರಕಟವಾಗಿವೆ.

### ಪ್ರತಿಯೊಂದಕ್ಕೂ ಒಂದಾಣೆ.

ಮೇಲಿನ ಹದಿನಾರು ಪುಸ್ತಕಗಳನ್ನು ಟಪ್ಪಾಲಲ್ಲಿ ತರಿಸಿಕೊಳ್ಳುವವರು 16 ಪುಸ್ತಕಗಳ ಕ್ರಯ ರೂ. 1 ಮತ್ತು ಅಂಚೆವೆಚ್ಚ 0—5—0 ಯನ್ನು ಮನಿಯಾರ್ಡರ್ ಮೂಲಕ ಅಥವಾ ಅಂಚೆಚೀಟುಗಳ ಮೂಲಕ ಕಳಿಸಿಕೊಡಬೇಕು. ವಿ. ಪಿ. ಕಳಿಸಲ್ಪಡುವುದಿಲ್ಲ.

## ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.

# ಮೊದಲ ಮಾತುಗಳು.

ಜೀವನು ನಿತ್ಯ ಹಾಗೂ ಸತ್ಯ ಸುಖವನ್ನು ಹೊಂದಲು ದೇವನನ್ನು ಮರೆಹೊಗಬೇಕಾಗಿದೆಯೆಂದು ಹಲವಾರು ವಿವರಣೆಗಳಲ್ಲಿ ಕಾಣುವುದು. ಈ ಮೊರೆಹೊಗುವ ತೆರವು ಹಲವು ಬಗೆಯುಳ್ಳದೆ. ಇಲ್ಲಿಯ ಕೆಲವು ಕೀರ್ತನೆಗಳಲ್ಲಿ ಅಂತಹ ಭಾವವೈವಿಧ್ಯವು ಒಡಮೂಡಿದೆ.

ಇಲ್ಲಿ ಎಂಟು ಮಂದಿ ಹರಿದಾಸರ ಕೃತಿಗಳಲ್ಲಿ ಎರಡೆರಡು ಪದ್ಯಗಳನ್ನು ಎತ್ತಿಕೊಂಡಿದೆ. ಇವರು ಬರೆದವುಗಳಲ್ಲಿ ಅಚ್ಚಾದವು ಕೆಲವಿದ್ದರೆ, ಅಚ್ಚಾಗದವು ಕೆಲವು; ಈಗ ದೊರೆಯದವು ಕೆಲವು ಇವೆ. ಈ ಪ್ರಾದೇಶಿಕ ಪ್ರಸಿದ್ಧರಾದ ಹರಿದಾಸರ ಕೃತಿಗಳನ್ನು ಪೂರ್ಣವಾಗಿ ಸಂಕಲಿಸಿದರೆ ಕನ್ನಡಸಾಹಿತ್ಯ ಹಾಗೂ ಜನಜೀವನದ ದೃಷ್ಟಿಯಲ್ಲಿ ಅವಶ್ಯವಿದೆಯೆಂದು ಹೇಳುತ್ತೇನೆ. ಇಲ್ಲಿಯ ಪದ್ಯಗಳೊಂದಿಗೆ ಕೊಟ್ಟ ವಿಶೇಷ ಸೂಚನೆಯ ಮಾತುಗಳು ಈ ಲೇಖಕನ ಕಾಣಿಕೆಗಳು; ಇಲ್ಲಿ ಒದವಿದ ತಪ್ಪುಗಳನ್ನು ಮನ್ನಿಸಿ, ಒಪ್ಪುಗಳನ್ನು ಕೈಗೊಳ್ಳಬೇಕಾದುದು. ಈ ಹರಿದಾಸರ ಜೀವನ ಚರಿತೆ ಮೊದಲಾದವು ತಿಳಿದಷ್ಟು ಸೂಚಿಸಲಾಗಿವೆ. ಇನ್ನೊಮ್ಮೆ ಈ ಬಗ್ಗೆ ಪ್ರಯತ್ನಿಸುವ ಭರವಸೆಯಿಂದ ಈ ಕಿರುಹೊತ್ತಗೆಯನ್ನು ಸ್ವೀಕರಿಸಬೇಕೆಂದು ಆಸ್ತಿಕ-ವಾಚಕರಲ್ಲಿ ವಿನಂತಿಸುತ್ತೇನೆ. ಇದೇ ತೆರದಲ್ಲಿ ಪ್ರಾದೇಶಿಕ ಪ್ರಸಿದ್ಧರಾದ ಬೇರೆ ಕೆಲವರ ಪದ್ಯಗಳು ಪ್ರಕಟನೀಯಗಳೆಂದು ಪ್ರತ್ಯೇಕ ವಿನಂತಿಸುವೆನು.

ಕನ್ನಡಿಗರಲ್ಲೊಬ್ಬ,

ತಾ. 10-4-60.
ಸುರತ್ಕಲ್ಲು.

ಕೆ. ವೆಂಕಟರಾಯಾಚಾರ್ಯ.

# ಹರಿದಾಸರ ಕೀರ್ತನೆಗಳು

..........

## ೧. ಶ್ರೀ ಪಾವಂಜೆ ಲಕ್ಷ್ಮೀನಾರಾಯಣ ರಚಿತಗಳು

|| ರಾಗ ಧನಾಶ್ರೀ—ಏಕತಾಳ ||

ಕರುಣಿಸಬಾರದೆ ಕಂಜನಾಭನೆ । ಕೈಯ್ಯ ಮುಗಿವೆನಯ್ಯ || ವರ ಫಣಿಗಿರಿ ಸುಸ್ಥಿರಮಂದಿರ ಶ್ರೀ । ಗುರು ಜನಾರ್ಧನ ಅಮರಾರ್ಚಿತ ಪದ || || ಪಲ್ಲವಿ || ಅಪರಾಧಗಳಾಲೋಚಿಸುವರೆ ಸರಿ । ನೃಪರಾಜನಿಗಳವೇ || ಕೃಪೆಯಿಂದಲಿ ಸಂರಕ್ಷಿಸದಿರ್ದಡೆ । ಅಪಕೀರ್ತಿಯು ನಿನಗಲ್ಲವೆ ಶ್ರೀ ಹರಿ || || ೧ || ಕನಕಪುರಂದರ ಮುಖ್ಯದಾಸರಂತೆ । ಗುಣವೆನಗಿನಿತಿಲ್ಲ || ಜನರ ವಿಡಂಬಕೆ ದಾಸನಾದರೂ । ಘನ ಮಹಿಮಾರ್ಣವ ಕನಕಾಂಬರಧರ || ೨ || ಲಕ್ಷಮಾತೇಶಕೆ ಲಕ್ಷ್ಮೀನಾರಾಯಣ । ರಕ್ಷಾಮಣಿ ನೀನು || ಪಕ್ಷೀಂದ್ರ ವಾಹನ ಪಾಪವಿಮೋಚನ । ತ್ರ್ಯಕ್ಷಮಿತ್ರನೆನ್ನಕ್ಷಿಗೋಚರನಾಗಿ || ೩ ||

ವಿ.ಸೂ: ಹರಿದಾಸರಲ್ಲಿ ಒಬ್ಬರಾಗಿ ಪ್ರಸಿದ್ಧರಾದ ಶ್ರೀ। ಪಾವಂಜೆಯವರ ಕೆಲವು ಪದ್ಯಗಳು ಈ ಮೊದಲೇ, 175 ಮತ್ತು 206ನೇ ಪುಸ್ತಕಗಳಾಗಿ ಪ್ರಕಟವಾಗಿವೆ. ಅವರು ರಚಿಸಿದ ಕೀರ್ತನೆಗಳು ಹಲವು, ಎರಡು ಮೂರು ಚಿಕ್ಕ ಸಂಕಲನಗಳಾಗಿ ಮಾತ್ರ ಅಚ್ಚಾಗಿದ್ದುವು; ಅಚ್ಚಾಗದೆ ಪ್ರಚಾರವಿರುವವುಗಳೆಲ್ಲವನ್ನು ಸಂಕಲಿಸಿ ಪ್ರಕಟಿಸುವರೆ ಸಂಬಂಧಪಟ್ಟವರು ಪ್ರಯತ್ನಿಸಬೇಕೆಂದು ತಾನೇ ನಮ್ಮ ಸದಾಶಯವಹದೆ. ಅದು ನೇರಿಗೆ ಇದೀಗಲೂ ಒಂದೆರಡು ಕೀರ್ತನೆಗಳನ್ನು ಸಂಕಲಿಸಿದ್ದೇವೆ. ಇಲ್ಲಿ ಭಕ್ತನು ತನ್ನ ಹಂತವನ್ನು ತಾನೇ ತಿಳಿದು ಕೊರಗುವನಲ್ಲದೆ, ತಾನೊಬ್ಬ 'ಜನರ ವಿಡಂಬಕೆ (ಹರಿ) ದಾಸ'ನೆಂಬಷ್ಟು ವಿನಮಿತನಾಗಿ, 'ಅಕ್ಷಿಗೋಚರನಾಗಿ–ಕರುಣಿಸಬಾರದೆ?' ಎಂದು ಮೊರೆಯಿಡುವುದು ಧ್ವನಿತವಾಗುವುದು! ಭಗವದ್ಗೀತೆಯಲ್ಲಿ ಹೇಳಿದಂತೆ 'ಆರ್ತ ಭಕ್ತನ' ವಾಣಿಯಿಲ್ಲಿದೆ. ಶ್ರೀರಾಗದ ವಿವಿಧ ರೂಪಗಳಲ್ಲಿ ಒಂದಾದ 'ಧನಾಶ್ರೀ' ರಾಗವು ಭಾವಕ್ಕೆ ತಕ್ಕ ಒಪ್ಪತಕ್ಕ ಧ್ವನಿಯಾಗಿದೆ!

॥ ರಾಗ ಮೋಹನ—ಏಕತಾಳ ॥

ಹರೇ ಶಂಕರಾ ಪಾರ್ವತೀ ವರಾ । ಪಾಲಿಸು ನೀ ಎನ್ನ ॥ ಪಲ್ಲವಿ ॥ ದುರಿತರಾಶಿಗಳ ದೂರಮಾಡು ಗಿರಿ । ವರ ಮಹಾನುಭಾವ । ಶಿವ ಶಿವ ॥ ॥ ಅನುಪಲ್ಲವಿ ॥ ತ್ರಿಗುಣಾತ್ಮಕ ತ್ರಿದಶಾಲಯ ಪೂಜಿತ । ನಿಗಮಾಗಮ ವಿನುತ ॥ ಅಗಜಾಲಿಂಗಿತ ಆ ಶೀವಿಧರ । ಮೃಗಧರಾಂಕ ಚೂಡ । ಹೃದ್ಗೂಢ ॥ ೧ ॥ ಸರ್ವೋತ್ತಮ ಹರಿಯಹುದೆಂಬ ಜ್ಞಾನವ । ಸರ್ವಕಾಲ ಕ್ಕೀಯೋ ॥ ದುರ್ವಾರ್ತೆಗಳನೆಲ್ಲ ದೂರಮಾಡೋ ಕರಿ । ಚರ್ಮಾಂಬರ ಧಾರ । ಪ್ರವೀರ ॥ ೨ ॥ ಸಂಜೀವನ ಲಕ್ಷ್ಮೀನಾರಾಯಣ ಮಣಿ । ರಂಜಿತ ನಿರ್ಲೇಪ ॥ ಮಂಜುಳ ಕದಿರೆಯ ಮಂಜುನಾಥ ಭವ । ಭಂಜನ ಹರಿ ಪ್ರಿಯ । ಜಯ ಜಯ ॥ ೩ ॥

ವಿ. ಸೂ: ಮಂಗಳೂರು ನಗರದ ಈಶಾನ್ಯದಲ್ಲಿರುವ ಹಾಗೂ ಸುಮಾರು ಸಾವಿರ ವರುಷಗಳ ಹಿಂದೆ ಪ್ರತಿಷ್ಠೆಗೊಂಡ ಮಂಜುನಾಥನು ಮೊದಲಿಗೆ ನಾಥಪಂಥದವರ ದೇವನಿದ್ದರೂ, ಬರುತ್ತಾ ಶೈವರ ದೇವನಾಗಿಯೂ ಅತ್ತ ಕುಡುಮಪುರ (ಧರ್ಮಸ್ಥಳ)ದಲ್ಲಿ ಜೈನರ ಆಡಳಿತ ಸೇವೆಗಳನ್ನು ಕೈಕೊಂಡವನಾಗಿಯೂ ಮೆರೆಯುತ್ತಿದ್ದಾನೆ. ಈ ಪದ್ಯದಲ್ಲಿ ಆ ದೇವ ದೇವನು ಶಿವನೆಂದು ಸ್ತುತಿಸಿದೆ. ಈ ಕವಿಯು ಮಾಧ್ವನಾದುದರಿಂದ 'ಹರಿಪ್ರಿಯ'ನಾದ ಆ ದೇವನು "ಸರ್ವೋತ್ತಮೋ ವಿಷ್ಣುಃ" ಎಂಬುದನ್ನು ತಿಳಿವಂತೆ ಜ್ಞಾನವನ್ನು ಕೊಡುವಂತೆ ಬೇಡಿದುದು ಒಪ್ಪತಕ್ಕುದಾಗಿದೆ. ಹರಿದಾಸರಾದ ಪುರಂದರ ವಿಠಲ ಮೊದಲಾದವರಲ್ಲಿ ಈ ಕ್ರಮವು ಕಾಣುವುದು. ಜೀವ ಜೀವರ ಭೇದ, ಜೀವ ಜಡರ ಭೇದ, ಜಡ ಜಡಗಳ ಭೇದ, ಜೀವ ಬ್ರಹ್ಮರ ಭೇದ, ಜಡ ಬ್ರಹ್ಮರ ಭೇದಗಳೆಂಬ ಪಂಚಭೇದಗಳು ಶ್ರೀ ಮಧ್ವಾಚಾರ್ಯರು ಸಾರಿದ ದ್ವೈತಸಿದ್ಧಾಂತದ 'ನವಪ್ರಮೇಯ'ಗಳಲ್ಲಿ ಸೇರಿದೆಯೆಂದು ಪ್ರಕೃತ ತಿಳಿಯತಕ್ಕುದಾಗಿದೆ. ಶ್ರೀಹರಿಗೆ—ಲಕ್ಷ್ಮೀ—ಬ್ರಹ್ಮಾ—ವಾಯು —ಗರುಡ ಶೇಷರುದ್ರ ಮೊದಲಾದವರು ಗುಣಾದಿಗಳಲ್ಲಿ 'ಅವರ'ರೆಂದೂ, ಇವರೆಲ್ಲರೂ ಹರಿಸೇವೆಗೆ ಮೀಸಲಾಗಿದ್ದಾರೆಂದೂ ಇಲ್ಲಿ ತಿಳಿಯಬರುವುದು!

## ೨. ಶ್ರೀ। ವೆಂಕಣ್ಣ ಕವಿರಚಿತಗಳು

॥ ರಾಗ ಖಮಾಜು—ಏಕತಾಳ ॥

ಕುಣಿದಾಡೋ । ಕೃಷ್ಣ । ಕುಣಿದಾಡೋ । ಒಮ್ಮೆ । ಕುಣಿದಾಡೋ ॥ ಪ ॥ ಮುದ್ದು ಮೊಗದೊಲವ । ಮುಗುಳ್ನಗೆ ದೋರೀ ॥ ತದ್ದಿಮಿ

ಕೆಂದು ಮುರಾರೀ ॥ ೧ ॥ ಹಸ್ತಾಂಗುಲಿ ಅಭಿ । ನಯಗಳ ಪಟ್ಟು ॥ ನೃತ್ಯದಿ ಹೆಜ್ಜೆಗಳನ್ನಿಟ್ಟು ॥ ೨ ॥ ಗೆಜ್ಜೆ ನೂಪುರ ಘಲ್ಘಲ್ । ಘಲರವ ದಿಂದ ॥ ತದ್ಧಣಿಕೆಂದು ಮುಕುಂದ ॥ ೩ ॥ ಸ್ಥಾಯಿ ಮೃದಂಗ ತಾ । ಳದಿ ಶ್ರುತಿಗೂಡಿ ಮಾ ॥ ಗಾಯಿ ಕುಂಡಲಗಳೋಲಾಡಿ ॥ ೪ ॥ ಸರಸ ಸಾಹಿತ್ಯ ಸಂ । ಗೀತ ಸುಪ್ರೇಮಾ ॥ ಗುರು ವೆಂಕಟ ಗುಣಧಾಮ ॥ ೫ ॥

ವಿ. ಸೂ: ಇಲ್ಲಿ ಕೃಷ್ಣನ ಕುಣಿತವು ವರ್ಣಿತವಾಗಿದೆ. ಒಂದನೆಯ ಸೊಲ್ಲಿನ ಮೋರೆಯ ಲಕ್ಷಣ ಸೂಚಿಸಿದೆ. ಎರಡನೆಯದರಲ್ಲಿ ಕೈಗಳ ಕುಲುಕು ಗುರುತಿಸಿದೆ. ಮೂರನೆಯದರಲ್ಲಿ ಕಾಲಿನ ಗೆಜ್ಜೆಗಳಿಂದ ತಕ್ಕ ದನಿಗೊಳ್ಳುವಂತೆ ಹೇಳಿದೆ. ನಾಲ್ಕನೆಯದರಲ್ಲಿ ಹಿಮ್ಮೇಳದ ದನಿಗೆ ತಕ್ಕ ನಲಿಯುವ ವೈಖರಿಯನ್ನು ತಿಳಿಸಿದೆ. ಕೊನೆಯದರಲ್ಲಿ 'ಸರಸ ಸಾಹಿತ್ಯ ಸಂಗೀತ'ಗಳ ಒಕ್ಕೂಟದ ಸವಿಗೂಡುವಂತೆ ಗೊತ್ತುಮಾಡಿದೆ. ಪ್ರತಿ ಸೊಲ್ಲುಗಳು ಮೂರು ಸಾಲುಗಳಲ್ಲಿ ಬಂದು ಚುಟುಕು ರೂಪಿನಲ್ಲಿದ್ದರೂ, ಒಂದನೆಯ ಸಾಲಿಗೂ ಮೂರನೆಯ ಸಾಲಿಗೂ ಆದಿ ಪ್ರಾಸವನ್ನೂ, ಎರಡನೆಯ ಸಾಲಿಗೂ ಮೂರನೆಯ ಸಾಲಿಗೂ ಅಂತ್ಯಪ್ರಾಸವನ್ನೂ ತಂದಿಟ್ಟುದರಿಂದ ಹೇಳಲು ಹಾಗೂ ಕೇಳಲು 'ಸರಸ ಸಾಹಿತ್ಯ—ಸಂಗೀತ'ಮಯವಾದ ಕೃತಿಯಾಗಿದೆ. ಕುಣಿತಕ್ಕೆ ಬೇಕಾದ ಆಂಗಿಕ, ವಾಚಿಕ, ಆಹಾರ್ಯ, ಸಾತ್ವಿಕಗಳೆಂಬ ನಾಲ್ಕು ತೆರದ ಸೂಚನೆ ಬಂದು ಸೊಗಸಾಗಿದೆ! ಇವರು 'ಕೃಷ್ಣ ಭಾಮಾ ಸಂವಾದ' ಇತ್ಯಾದಿ ಬರೆದಿದ್ದಾರೆ.

॥ ರಾಗ ಆನಂದಭೈರವಿ—ಏಕತಾಳ ॥

ಅಲ್ಲಲ್ಲಲ್ಲಲ್ಲಾ । ಸುಖವಿ । ನ್ನಿಲ್ಲಿಲ್ಲಿಲ್ಲಿಲ್ಲಾ ॥ ಪ ॥ ಸುಳ್ಳು ಸಂಸಾರ । ಮಾಯಾಭ್ರಾಂತಿಯ ಮನ । ಪೊಳ್ಳು ಇದೆಂದು । ಬಲ್ಲವರಿಗೆ ನಿಜ ॥ ॥ ಅ. ಪ. ॥ ರೊಕ್ಕವು ತೀರಿದ । ಕಾಲಕೆ ತನ್ನನು । ಮಕ್ಕಳು ಮರಿಗಳು । ಲೆಕ್ಕಕ್ಕೆ ತರುವವರ್ ॥ ೧ ॥ ಅಂಗನೆ ಮಕ್ಕಳು । ಆಪ್ತರು ಬಂಧು ಜ । ನಂಗಳು ಒಬ್ಬರು । ಸಂಗಡ ಬರುವವರ್ ॥ ೨ ॥ ವಲ್ಲಭ ಶ್ರೀಗುರು । ಲಕ್ಷ್ಮೀವೆಂಕಟ । ನಲ್ಲದೆ ಬೇರೊ । ಬ್ಬರು ಬಂಧುಗಳಾರ್ ॥ ೩ ॥

ವಿ. ಸೂ: ಸಂಸಾರವು ಪ್ರತಿಯೊಂದು ಜೀವಿಗೂ ಅಗತ್ಯ ಬೇಕಾದುದೆಂದೂ, ಆದರೆ ಕೇವಲ ಸಂಸಾರವೇ ತನ್ನ ಇತಿಕರ್ತವ್ಯವೆಂದು ತಿಳಿಯ

ಲಾಗದೆಂದೂ ಹಿತಬೋಧೆಯು ಇಲ್ಲಿ ಸೂಚಿತವಾಗುವುದು. "ಮನೆಯಲ್ಲಿ ಮಡದಿ ಮಕ್ಕಳು ನಿಲ್ಲುವರು; ಮಸಣದಲ್ಲಿ ಇಷ್ಟಬಂಧುಗಳು ನಿಲ್ಲುವರು; ಸುಕೃತವಾಗಲೀ ದುಷ್ಕೃತವಾಗಲೀ ಮುನ್ನಡೆವ ಜೀವನನ್ನು ಅನುಸರಿಸುತ್ತವೆ"ಯೆಂಬ ಸೂಕ್ತಿಯ ಧ್ವನಿಯು ಇಲ್ಲಿದೆ 'ರೊಕ್ಕವೆರಡಕ್ಕು ದುಃಖ" ವೆಂಬ ಹರಿದಾಸರ ಪದ್ಯದ ಮರುನುಡಿಯಿದು, ಜೀವಾತ್ಮನು ಪರಮಾತ್ಮನತ್ತ ಧಾವಿಸುವಾಗ ಮಡದಿ ಮಕ್ಕಳು ಮೊದಲಾದವರು ಸಂಗಡ ಬರಲೊಲ್ಲರೆಂದಾಗ ಅವರೇ ಜೀವನ ಸರ್ವಸ್ವವೆಂದು ಭಾವಿಸಬಾರನೆಂದು ಎರಡನೆಯ ಸೊಲ್ಲಿನಲ್ಲಿದೆ, ದೇವನೊಬ್ಬನೇ ಜೀವನಿಗೆ ಬಂಧುವೆಂದು ಮೂರನೆಯದಾಗಿ ಸಾರಿದೆ. ಈ ಹಾಡಿನಲ್ಲಿ ಮೊದಲಾಗಿ 'ಅಲ್ಲ–ಇಲ್ಲ'ವೆಂಬ ನುಡಿಗಳು ನಾಲ್ಕು ಬಾರಿ ಬಂದುದು ಶಬ್ದಾಲಂಕಾರದೊಂದಿಗೆ ಸತ್ ಭಾವನೆಯನ್ನು ಉದ್ಬೋಧಿಸುತ್ತವೆ. ಪ್ರತಿಯೊಂದು ಸೊಲ್ಲಿನಲ್ಲಿ ಮೂರಿಡೆ ಆದಿಪ್ರಾಸಗಳು ಮತ್ತಷ್ಟು ಸೊಬಗನ್ನು ತಂದಿವೆ. ನಿಶ್ಚಿತ ಹಾಗೂ ಗಂಭೀರವಾದ ತಾತ್ಪರ್ಯವನ್ನು ಹೊಂದಿದ ಈ ಪದ್ಯವು ಕಾಣಲು ಚಿಕ್ಕದಾದರೂ ಹಿರಿದಾದ ಅರ್ಥಗಾಂಭೀರ್ಯದಿಂದ ಕೂಡಿದೆ. ಇದನ್ನು ನಿದಾನ ಹಾಗೂ ತುರಿತಗತಿಯಿಂದ ಹೇಳುವುದಕ್ಕೆ ಬರುವುದು.

## ೩. ಶ್ರೀ| ವಾಸುದೇವ ಪ್ರಭು ಕೃತಿಗಳು

॥ ರಾಗ ಪೀಲು—ಏಕತಾಳ ॥

ಬಾರೋ ಬೇಗ ಬಾರೋ ರಾಮ | ಬಾರೋ ನೀ ಮೊಗದೋರೋ ರಾಮ ॥ ಪ ॥ ಅಗಣಿತ ಮಹಿಮ | ರಘುಕುಲೋದ್ಧಾಮ ॥ ನಿಗಮಾಗಮ ಪೂಜಿತ ಶ್ರೀರಾಮ ॥೧॥ ಕುಜನ ಕುಠಾರೀ | ಸುಜನೋದ್ಧಾರೀ ॥ ಭಜಕ ನಿಕರ ದುರಿತಾರಿ | ರಾಮ ॥ ೨ ॥ ಪಂಕಜನಯನ | ವೆಂಕಟರಮಣ ॥ ಸಂಕಟಹರಣ ರಮಾಪತಿ ಚರಣ ॥ ೩ ॥

ವಿ.ಸೂ: ಶ್ರೀ| ಮಟ್ಟಿ ವಾಸುದೇವ ಪ್ರಭುಗಳು ರಚಿಸಿದ ಶ್ರೀಕೃಷ್ಣನ ಬಾಲಲೀಲೆ, ಬಿಲ್ಲ ಹಬ್ಬ, ಸಮುದ್ರಮಥನ, ಚಂದ್ರಹಾಸ ಚರಿತೆ, ರಾಧಾವಿಲಾಸಗಳು ಕನ್ನಡದಲ್ಲೆಡೆ ಸುಪ್ರಸಿದ್ಧವಾಗಿವೆ. ಶ್ರೀಯುತರ ಕೃತಿಗಳಲ್ಲಿ ರಮಾಧವ (ರಮಾಪತಿ) ಎಂಬ ಮುದ್ರಿಕೆಯಿದೆ. ಇದೀಗಣ ಪದ್ಯವು ರಾಮಪರವದೆ. ಭಕ್ತನು ದೇವನನ್ನು ಕಳಕಳಿಯಿಂದ ಕರೆಯುವ ಈ

ರೀತಿಯು ಬಹಳ ಸೊಬಗು ಕೂಡಿದೆ. ಪ್ರತಿಸೊಲ್ಲಿನ ಮೂರು ಸಾಲುಗಳಲ್ಲಿ ಆದ್ಯಂತ ಪ್ರಾಸಗಳು ಕಿವಿಗೆ ಇಂಪನ್ನು ಕೊಡುವಂತೆ ಭಾವಿಕತೆಯಿಂದ ಕೂಡಿ ಮನೋಹ್ಲಾದಕರಗಳೂ ಆಗಿವೆ. ಒಟ್ಟಿನಲ್ಲಿ ಲಗುಬಗೆಯುಲ್ಲಿ ಸಾಗಿದ ಈ ಕವಿತೆಯು ಕೀರ್ತನೆಯೊಂದಿಗೆ ಕುಣಿತಕ್ಕೆ ತಕ್ಕುದಾಗಿದೆ.

॥ ರಾಗ ಸುರುಟಿ—ಚೌತಾಳ ॥

ಶ್ರೀಹರೀ । ಕೃಷ್ಣ ಮುರಾರೀ । ಕೇಶವ ಚಕ್ರಧಾರೀ ॥ ಪ. ॥ ಸುಂದರ ಸುಮನಸ । ವೃಂದ ಮುನಿಮಾನಸ ॥ ನಂದ ಗೋವರ್ಧನೋದ್ಧಾರೀ ॥ ೧ ॥ ಹಂಸವಾಹನ ಸ್ತುತ್ಯ । ಕಂಸಮಥನ ನಿತ್ಯ ॥ ಹಂಸಡಿಬಿಕ ಚಾಣೂರವೈರೀ ॥ ೨ ॥ ವಾತ ವತ್ಸ ಪ್ರಲಂಬ । ಖ್ಯಾತ ಬಕ ಧೇನುಕ । ಪೂತನಿ ಪ್ರಾಣಾಪಹಾರಿ ॥ ೩ ॥ ಕಂತುಪಿತ ಶ್ರೀಲಕ್ಷ್ಮೀ । ಕಾಂತ ಕೃಷ್ಣ ಶ್ರೀಮುದ । ನಂತ ಸುದರ್ಶನಧಾರೀ ॥ ೪ ॥ ಸಾಂಸಭವಪಿತ । ಶ್ರೀರಮಾಧವ ಪಾರ್ಥ । ಸಾರಥಿ ದುರಿತೋತ್ತಾರೀ ॥ ೫ ॥

ವಿ. ಸೂ: ಈ ಮೊದಲ ಪದ್ಯದಲ್ಲಿ ಶ್ರೀರಾಮನ ಸ್ತುತಿಯಿದ್ದರೆ, ಇಲ್ಲಿ ಶ್ರೀಕೃಷ್ಣನ ಸ್ತುತಿಯಿದೆ. ಅಯ್ದು ಸೊಲ್ಲಿನ ಎಲ್ಲೆಡೆ ಮೃದು ಪದ ಬಂಧವು ಒತ್ತಕ್ಕರವೂ ಬಂದುದರಿಂದ ಶ್ರವ್ಯವೂ ಗೇಯುವೂ ಆಗಿರುವುದು. ಅವರೊಂದಿಗೆ ಕೃಷ್ಣಾವತಾರದ ವಿಶೇಷ ಕೃತಿಗಳನ್ನು ಸೂಚಿಸಿರುವುದು ಅತ್ಯಂತ ಶುಭದಾಯಕವಾಗಿದೆ. ಕೃಷ್ಣಾವತಾರವು ಈ ಯುಗಕ್ಕೆ ಶೀರಾಸವಿೂಪಕಾಲದಲ್ಲಿ ನಡೆದುದರಿಂದ ಹೆಚ್ಚು ಮಂದಿಗೆ ಇಷ್ಟ—ಪೂಜ್ಯವಾಗಿದೆ. ವೇದಾಂತ ಗ್ರಂಥಗಳಲ್ಲಿ ಒಂದಾದ ಭಗವದ್ಗೀತೆಯು ಪಾರ್ಥಸಾರಥಿಯಾದ ಶ್ರೀಕೃಷ್ಣನಿಂದಲೇ ಹೇಳಲ್ಪಟ್ಟು, ಲೋಕದೆಲ್ಲೆಡೆ ಗೌರವಾರ್ಹವಾದುದನ್ನು ಇಲ್ಲಿ ಕೊನೆಯ ದಾಗಿಯೂ ಹೆಚ್ಚಿನದಾಗಿಯೂ ಹೇಳಿದೆ.

## ೪. ಶ್ರೀ। ಶೇಷಪ್ರಭು ರಚಿತಗಳು

॥ ಸುರಟಿ ರಾಗ—ಆದಿತಾಳ ॥

ಪಾಲಿಸು ಶ್ರೀಹರಿಯೇ । ಸದ್ಗುಣ । ಶೀಲ ಭಾಗ್ಯನಿಧಿಯೇ ॥ ಶ್ರೀ ಲಲಾಮ ಶೇಷಾಚಲಾಧೀಶ ಶ್ರೀ । ಲೋಲ ಬಾಲಭಾಸ್ಕರ ಸಂಕಾಶನೆ ॥ ಪ ॥ ಕಂಡವರಿಂಗೆರಗಿ । ದೈನ್ಯವ । ಗೊಂಡೆ ಖಿನ್ನನಾಗಿ ॥ ಭಂಡನಾಗಿ ಬಳಲಿಸಿ

ಬಹುಕಾಯುವ । ದಂಡಿಸಿದೆನು ರಕ್ಷಿಸೋ ಶ್ರೀಹರಿಯೆ ॥ ೧ ॥ ಯಾರಿಗೆ ದೂರುವೆನ । ಭಕ್ತೋ । ದ್ಧಾರನಲ್ಲವೆ ನೀನು ॥ ಘೋರದುರಿತ ದಾರಿದ್ರ್ಯದ ವ್ಯಥೆಯು ಇ । ನ್ನ್ಯಾರಿಗೊರವೆ ಆದನ್ನಾರು ಕಾವರೈ ॥ ೨ ॥ ಏನಪರಾಧ ವನು । ಗೈದೆ ನಾ । ನೀಸು ಪಾಪಾತುವುನೋ ॥ ಈಸಪರಾಧವನೆಣಿಸದೆ ಎನ್ನಯ । ಕ್ಲೇಶವ ಪರಿಹರಿಸೋ ದಯಾನಿಧೇ ॥ ೩ ॥ ಕರುಣಾಸಾಗರನೇ । ತ್ರಿಜಗ । ದ್ಭರಿತ ಕೃಪಾಕರನೇ ॥ ಪರಮಾತ್ಮ ದಯಾಪರ ಪುರುಷೋತ್ತಮ । ಪರಂಜ್ಯೋತಿ ಪರಬ್ರಹ್ಮ ಸ್ವರೂಪನೆ ॥ ೪ ॥ ರಂಗನಾಥನೆನ್ನ । ಕಾಯೊ ವಿ: ಹಂಗರಾಜಗಮನ ॥ ಗಂಗಾಜನಕ ರಮಾಧವ ಕರುಣಾ । ಪಾಂಗ ರಂಗ ಮಂಗಲಾಂಗ ರಕ್ಷಿಸು ॥ ೫ ॥

ವಿ. ಸೂ: ಶೇಷಪ್ರಭುರಚಿತ ಕೀರ್ತನೆಗಳು ಹಲವು ಇವೆ. ಇಲ್ಲಿನ ದರಲ್ಲಿ ದೀನಭಾವವು ಪಡಿಮೂಡಿದೆ, ಬೇರೆ ಶರಣರಿಲ್ಲೆಂಬಷ್ಟು ಏಕೋ ಭಾವದ ಭಕ್ತಿಯು ಉಂಟಾಗಿದೆ. ಈ ಕಷ್ಟಗಳಿಗೆ ತನ್ನ ಪೂರ್ವಕರ್ಮಗಳೇ ಕಾರಣಗಳೆಂದು ಕಂಡುಕೊಂಡಿದೆ. ತ್ರಿಜಗದ್ಭರಿತನೂ, ಅತಏವ ತ್ರಿಜಗ ತ್ಪಾಲಕನೂ ಆದವನು ತನ್ನೊಬ್ಬನನ್ನು ಕಾಪಾಡುವುದು ಹೆಚ್ಚಾಗದೆಂಬ ಕಳಕಳಿಯು ಕೇಳಿಬರುವುದು. ಕರುಣಾಪಾಂಗದಿಂದ ಮಂಗಲವನ್ನು ಕೊಟ್ಟು ರಕ್ಷಿಸೆಂಬ ಮೊರೆಯಿದೆ. ಅನುಪ್ರಾಸದ ಅನುರಣನದಿಂದಲೂ, ಶಬ್ದಗಳ ಲಾಲಿತ್ಯದಿಂದಲೂ ಕೂಡಿದ ಈ ಪದ್ಯವು ಹೃದ್ಯವೆಂಬಲ್ಲಿ ಸಂಶಯವಿಲ್ಲ.

॥ ರಾಗ ಆನಂದಭೈರವಿ—ಏಕತಾಳ ॥

ಹರಿಯೆ । ಎನ್ನ । ಮರೆತಿರುವರೆ ಇದು ಸರಿಯೇ । ಪಾಲಿಸು ನೀ ಧೊರೆಯೆ । ತರಳತನದಿ ನಾ ಮರೆತೆನೆಂದು ನೀ । ಜರೆದುಬಿಟ್ಟರೆ ಮುಂಪೊರೆವರ್‍ಯಾರೈ ಶ್ರೀ ॥ ಪ. ಒಡೆಯ ನೀನಾಗಿ ಸಲಹುವುದೀಗ । ನಿನ್ನಯ ಪದ । ಜಡಜಕೆರಗುವೆ ನಾಬೇಗ ॥ ಕಡುದಾರಿದ್ರ್ಯದ ಕಡಲೊಳು ಮುಳುಗಿದೆ । ತಡಿಯ ಕಾಣಿಸೊ ಜಗದೊಡೆಯ ದಯದಿ ಶ್ರೀ ॥ ೧ ॥ ತರಳ ಧ್ರುವರಾಜನಿಗೊಲಿದೆ । ಅಂಬರೀಷನ । ಭರದಿ ಚಕ್ರದಿಂದಲಿ ಕಾಯ್ದೆ ॥ ತರಳೆಯು ಸಭೆಯಲ್ಲಿ ದುರುಳ ಬಾಧಿಸುತಿರೆ । ಭರದೊಳಕ್ಷಯವಿತ್ತುದ್ಧರಿಸ ಲಿಲ್ಲವೆ ಶ್ರೀ ॥ ೨ ॥ ಕಷ್ಟಪಟ್ಟೆ ಭವದೊಳಾನು । ಎನ್ನ ಮನದ । ಭೀಷ್ಟ ಪಾಲಿಸೊ ದೇವ ನೀನು ॥ ಸೃಷ್ಟಿಗೊಡೆಯ ದಯಾದೃಷ್ಟಿಯಿಂದಲಿ ಮನ ।

ಶಿಷ್ಟರ ಸಲಹೊ ಪರಮೇಷ್ಠಿ ಜನಕ ಶ್ರೀ ॥ ೩ ॥ ತಂದೆ ನೀನಲ್ಲವೆ ಜಗದೀಶ । ಪಾಲಿಸು ನಿನ್ನ । ಕಂದನಲ್ಲವೆ ಸರ್ವೇಶ ॥ ಹಿಂದ ಮುಂದನಾನೊಂದನರಿಯೆ ದಯ । ದಿಂದ ಕಾಯೊ ಮುಚುಕುಂದವರದ ಶ್ರೀ ॥ ೪ ॥ ಮಂಗಲಪುರವಾಸ । ಶ್ರೀ ವೆಂಕಟೇಶ । ಅಂಗಜಜನಕ ರಮೇಶ ॥ ಮಂಗಲಾಂಗ ನಿನ್ನಂಘ್ರಿಸೇವಕರ ಸ । ಸಂಗವ ಪಾಲಿಸು ಗಂಗಾಜನಕ ಶ್ರೀ ॥ ೫ ॥

ವಿ. ಸೂ: ದೇವ-ಜೀವರು ಬಿಂಬಪ್ರತಿಬಿಂಬಗಳಂತಿದ್ದಾರೆ. ಆ ಕಾರಣ ಜೀವನು ಮರೆತರೂ ದೇವನು ಮರೆಯದೆ ದೇವನ ಉದ್ಧಾರಕ್ಕೆಳಸುವುದು ಅಗತ್ಯವೆಂದು ಸದ್ಭಾವನೆಯು ಇಲ್ಲಿ ಒಳಗೊಂಡಿದೆ. ದೇವನ ಮಹಿಮೆ ಭಕ್ತರ ಚರಿತ್ರೆಗಳಿಂದ ತಿಳಿವಂತೆ ಸೂಚಿಸಿದೆ. ಕಂದನು ತಪ್ಪು ಮಾಡಿದರೂ ತಂದೆ ಕ್ಷಮಿಸುವಂತೆ ಕಾಪಾಡೆಂದು ಮಂಗಳೂರ ವೆಂಕಟರಮಣನನ್ನು ಕೂಗಿ ಕರೆದ ಈ ಪದ್ಯವು ಕಾವ್ಯಮಯವಾಗಿದೆ ಭಕ್ತಿರಸಭರಿತವಾಗಿದೆ.

## ೫. ಕವಿ ರಾಮಕೃಷ್ಣ ರಚಿತಗಳು

॥ ರಾಗ ಸಾರಂಗ—ರೂಪಕತಾಳ ॥

ಅಭಯ ಬೇಡೊ ಸುಮನ ಸುಂದರ । ಶ್ರೀಹರಿಯ ಪ್ರಿಯ । ಅಭಯ ಬೇಡೊ ಸುಮನಸುಂದರ ॥ ಪ ॥ ಅಭಯ ಬೇಡೊ ಪ್ರಿಯರಮಾ । ವಿಭು ಜಗನ್ನಿವಾಸನೊಡನೆ । ಉಭಯ ಸುಖವನೀವ ಚೆಲ್ವ । ಅಬುಜ ನೇತ್ರ ಸೊಬಗನೆಂದು ॥ ಅ. ಪ. ॥ ಘೋರಭವದ ಪಾಶ ಮುನ್ನ । ಲೋರಣಿಸದೆ ಕೊರಳೊಳು । ಚಾರು ನವ ಸುಭಕ್ತಿ ಮುಖವಿ । ಸ್ತಾರದಿಂದ ಮಾರಪಿತನ ॥ ೧ ॥ ನೊಂದು ವಾರಣೇಂದ್ರ ತನ್ನ । ದಂದುಗದಲಿ ನುತಿಸಲು । ಬಂದು ರಕ್ಷಿಸಿದ ಮುಕುಂದ । ಸಿಂಧುಶಾಯಿ ಎಂದು ಹರಿಯ ॥ ೨ ॥ ವಿಗಡ ದೈತ್ಯ ತರಳನನ್ನು । ಅಗಣಿತದಲಿ ಬಾಧಿಸೆ । ಮಗುವು ಕರೆಯೆ ಬಂದು ಕಾಯ್ದ । ನಿಗಮನುತ ಪರಾಕು ಎನುತ ॥ ೩ ॥ ಕಿಂಕರೌಘ ಸುಪ್ರಸನ್ನ । ಸಂಕಟೌಘ ಧ್ವಂಸನ । ವೆಂಕಟೇಶ ವರದ ಒಳ । ಲಂಕೆಯಧಿಪ ಗುರು ನೃಹರಿಯ ॥ ೪ ॥

ವಿ. ಸೂ: ಯಕ್ಷಗಾನ ರೀತಿಯಲ್ಲಿ ತೆಂಕುಮಟ್ಟಿನ ಕೃತಿಗಳಾದ ಕೃಷ್ಣಾರ್ಜುನ ಕಾಳಗ ಮತ್ತು ಸುಧನ್ವ ಕಾಳಗಗಳನ್ನು ಬರೆದ ಮೂಲ್ಕಿ ರಾಮಕೃಷ್ಣಯ್ಯನು ಮೂಲಿಕೆಯ ಗುರು ನರಸಿಂಹ ಮತ್ತು ವೆಂಕಟೇಶ ನನ್ನು ಸ್ತುತಿಸಿದ್ದಾನೆಂದು ತಿಳಿಯುತ್ತದೆ (ಶ್ರೀ। ಶಿವರಾಮ ಕಾರಂತರು ಬರೆದ 'ಯಕ್ಷಗಾನ ಜಯಲಾಟ'ದ ಪುಟ 265 ನೋಡಿರಿ). ಈ ಕವಿಯು ಆತನಿರಬೇಕು. ಇಲ್ಲಿ 'ಇಹ ಪರ' ಲೋಕಗಳ ಸುಖವನ್ನು ಬೇಡುವಂತೆ ಕಾಣುತ್ತದೆ ಅದಕ್ಕೆ 'ನವಸುಭಕ್ತಿಮುಖ'ವೆಂದು ಸೂಚಿಸಿದೆ. ಗಜೇಂದ್ರ ಹಾಗೂ ಪ್ರಹ್ಲಾದರನ್ನು ಕಾಪಾಡಿದಂತೆ ತನ್ನನ್ನು ಕಾಯಲು ಬೇಡಿಕೊಂಡಿದೆ. 'ಒಳಲಂಕೆ'ಯೆಂದರೆ ಮೂಲಿಕೆಯೆಂದು ಎಲ್ಲರಿಯವರಿಗೂ ಗೊತ್ತಿದೆ.

॥ ಕಲ್ಯಾಣಿ ರಾಗ — ರೂಪಕ ತಾಳ ॥

ಮಂಗಳಾಂಗ ಮನ್ನಿಸು ತಪ್ಪನು । ರಂಗನಾಥ । ರಕ್ಷಿಸೈಯ್ಯ ತಂದೆ ಯೆನ್ನನು ॥ ಪ ॥ ಮಮತೆಯಿಲ್ಲದ ಮಡದಿಯಾತಕೆ । ರಂಗನಾಥ । ಸುಮತಿಯಿಲ್ಲದ ಸುತನು ಯಾತಕೆ ॥ ಕುಮತಿಯುತರ ಸಂಗವೇಕೆ । ಸಮತೆಯಿಲ್ಲದ ಬಂಧುವೇಕೆ । ಅಮಿತ ನಿನ್ನ ಚರಣಕಮಲ । ರಮಿತನಾಗದ ಮನುಜನೇಕೆ ॥ ೧ ॥ ಕಣ್ಣು ಇಲ್ಲದ ರೂಪು ಯಾತಕೆ । ರಂಗನಾಥ । ಹೊನ್ನು ಇಲ್ಲದ ಬಾಳು ಯಾತಕೆ ॥ ಮುನ್ನ ಮೂಗು ಇಲ್ಲದ ಮೊಗವು । ಮಣ್ಣು ತಿಂದು ಹೋದರೇನು । ಅಣ್ಣ ನಿನ್ನ ಭಕುತಿಯಿಲ್ಲದ । ಸಣ್ಣ ಮನುಜ ಸತ್ತರೇನು ॥ ೨ ॥ ದಾನವಿಲ್ಲದ ಧನವಿದೇತಕೆ । ರಂಗನಾಥ । ಜ್ಞಾನವಿಲ್ಲದ ವಿದ್ಯೆಯಾತಕೆ ॥ ಆಣೆಯಿಲ್ಲದ ಅರಸು ತಾನು । ಅಡವಿ ಪಾಲು ಆದರೇನು । ದೀನಬಂಧು ನಿನ್ನ ನಂಬದ । ಮಾನಹೀನ ಮನುಜನೇಕೆ ॥ ॥ ೩ ॥ ಮಕ್ಕಳಿಲ್ಲದ ಮನೆಯು ಯಾತಕೆ । ರಂಗನಾಥ । ಅಕ್ಕರಿಲ್ಲದ । ಊಟ ಯಾತಕೆ ॥ ಸೊಕ್ಕಿ ನಡೆವ ಬಂಟನೇಕೆ । ಮಿಕ್ಕು ಮೀರ್ವ ಶಿಷ್ಯನೇಕೆ । ರಕ್ಕಸಾರಿ ನಿನ್ನ ಸೇರದ । ಸೊಕ್ಕು ನರಜನ್ಮವೇಕೆ ॥ ೪ ॥ ಸಾಕು ಸಾಕು ದೀನನಾದೆನು । ರಂಗನಾಥ । ಸಾಕು ಸಾಕೈ ಬೇಗಯೆನ್ನನು ॥ ಕಾಕುಮಾಡಿಯೆ ವೈಕುಂಠ । ನಗರದೊಡೆಯ ನಾರಸಿಂಹ । ಏಕಭಕ್ತಿಯಿಂದಲಿರುವೆ । ಯೇಕೆ ಕೈಯ ಬಿಡುವೆ ದೊರೆಯೆ ॥ ೫ ॥

ವಿ. ಸೂ: ಮನುಷ್ಯರು ಬಯಸುವ ಪ್ರತಿಯೊಂದು ಬಗೆಗಳು ಹೇಗಿರಬೇಕೆಂದು ಮುಳ್ಳಾಲು ಸೊಲ್ಲುಗಳಲ್ಲಿ ಸೂಚಿಸುತ್ತಾ ಅವುಗಳೊಂದಿಗೆ ದೈವಿಕ

ಭಕ್ತಿಯ ಶ್ರೇಷ್ಠತೆಯನ್ನು ಕುರಿತು ಪ್ರತಿಯೊಂದು ಸೊಲ್ಲುಗಳಲ್ಲಿ ಸಾರಿದುದು ಇಲ್ಲಿದೆ. ಕೊನೆಯ ಸೊಲ್ಲಿನಲ್ಲಿ 'ಸಾಕು, ಸಾಕು'ಯೆಂಬಲ್ಲಿ ಎರಡು ತೆರದ ಅರ್ಥಗಾರಿಕೆಯ ಹೊಳಹು ಇದೆ. ಎಲ್ಲಾ ಬಗೆಗೂ ಕೊನೆಯದು ಹಾಗೂ ಮೇಲಿನದು 'ಹರಿಭಕ್ತಿ' ಎಂಬುದೇ ಇಲ್ಲಿಯ ತಾತ್ಪರ್ಯ.

## ೬. ಶ್ರೀ| ವಾಸುದೇವ ಶ್ಯಾನುಭಾಗರ ಕೃತಿಗಳು

|| ರಾಗ ಕಾಂಬೋಧಿ—ತ್ರಿಪುಟ ತಾಳ ||

ತಾಳಲೆಂತೈ ಹರಿಯೆ | ಭವ ಬಾಧೆ | ರಮಾಕಾಂತ ಅನಂತ ಗುಣವಂತ ರಕ್ಷಿಸು || ಪ. || ವರ ಘೋರ ದುರಿತ ಪಾರಾವಾರ | ದಯಾಸಾರ ಉದಾರ ಎನ್ನ ಪಾರಗಾಣಿಸು || ೧ || ಕಾವರಾರೈ ನೀನುಳಿದಿಹ ಪರದಿ | ಕೃಪೆದೋರೈ ನೀ ಬಾರೈ ನಿನ್ನೊಳು ಸೇರೈಸಿ ಮನ || ೨ || ವಾಸುದೇವ ರಮೇಶ ದೀನಬಂಧು | ಜಗಜ್ಜೀವ ಕೇಶವ ಎನ್ನ ಠಾವ ಪಾಲಿಸು || ೩ ||

ವಿ. ಸೂ: ಅಲಂಗುಗಳ ಜತೆಗೂಡಿದ ಈ ಚಿಕ್ಕ ನುಡಿಗಳಾದರೂ ಮನೋಜ್ಞವಾಗಿವೆ. 'ಇಹಪರ'ಗಳಲ್ಲಿ ನೀನೇ ಕಾವ ದೇವನೆಂಬ ದೃಢ ಭಾವನೆಯು ಒಡಮೂಡಿದೆ. ಕೊನೆಗೆ 'ಎನ್ನ ಠಾವ ಪಾಲಿಸು' ಎಂದು ಮುಕ್ತಿಯನ್ನು—ಅತ್ಯಂತ ಸುಖವನ್ನು—ಪಾಲಿಸುವಂತೆ ಬೇಡಿದುದು ಚೆಲುವಾಗಿದೆ!

|| ರಾಗ ಸೌರಾಷ್ಟ್ರ—ಅಷ್ಟ ತಾಳ ||

ಬಪ್ಪ ಶುಭಾಶುಭ | ತಪ್ಪದಾದರೆ ನಿನ್ನಿಂ | ದಪ್ಪುದೇನಪ್ಪ ಹರಿ || ಪ. || ಬಂದಾಪತ್ತ ನೀಗುತ್ತಾ | ನಂದ ಪ್ರಾಪ್ತಿಸಲು ಗೋ | ವಿಂದ ನಿನ್ನ ಸೇವೆರ್ಪುದು || ೧ || ಮುದ್ದಿನ ಪರಲಿಪಿ | ತಿದ್ದಿ ಕಾಯುದ್ದರಿಂದ | ಹೊದ್ದಿ ಸಾನಿದ್ದೆ ನಿನ್ನ || ೨ || ಕೈಯ ಮುಗಿವೆ ಜಗ | ದಯ್ಯ ದಮ್ಮಯ್ಯ ಪಾಲಿ | ಸಯ್ಯ ನೀ ಸೈಯೆನಿಸಿ || ೩ || ಪ್ರಾರಬ್ಧ ಫಲ ವಿಾರ | ಬಾರದೆಂಬರಿವಿಂ | ದೂರ ನೀ ತಪ್ಪಿಸುವೆ || ೪ || ವಾಸುದೇವ ರಮೇಶ | ದೋಷ ಕ್ಷಮಿಸಿ ತವ | ದಾಸನ ರಕ್ಷಿಸಯ್ಯ || ೫ ||

ವಿ. ಸೂ: 'ಭಯಕೃತ್ ಭಯನಾಶನಃ' ಎಂಬುದು ದೇವನಿಗೆ ಒಪ್ಪುವುದು. ಅಂತೆ ಆಪತ್ತು ತೊಲಗಿಸಿ ಆನಂದವನ್ನೀಯಲು ದೇವ

ನನ್ನು ಸೇರಬೇಕಾದುದು. ಸಂಚಿತ, ಪ್ರಾರಬ್ಧ, ಆಗಾಮಿಗಳಲ್ಲಿ ದೈವಾನುಗ್ರಹದಿಂದ ಆದ್ಯಂತಗಳು ಕಳೆದರೂ ಪ್ರಾರಬ್ಧವು ಪೂರೈಸುವವರೆಗೆ ಅನುಭವಿಸಿಯೇ ತೀರಬೇಕೆಂಬ ತಾತ್ವಿಕ ವಿಚಾರ ಇಲ್ಲಿದೆ.

## ೭. ಶ್ರೀ| ಬಂಗ್ಲೆ ನಾರಾಯಣ ಕಾಮತರ ಕೃತಿಗಳು

॥ ರಾಗ ಕೇತಾರಗೌಳ ಏಕತಾಳ ॥

ಪಾಲಿಸೈ ತ್ರಿಶೂಲಿಯೆ ಮುದದಿಂ । ಕಲಿ ಕಾಲರುದ್ರನೆ । ಪಾಲಿಸೈ ತ್ರಿಶೂಲಿಯೆ ಮುದದಿಂ ॥ ಪ. ॥ ವಂದಿಸುವೆನಯ್ಯ । ಇಂದುಧರ ದಯಾ । ಸಿಂಧು ಎನ್ನಯ । ಬಂಧು ಬಿಡಿಸೈಯ್ಯ ॥ ಅಂದು ಪಾಲ ಮುದ ಚಂದ ನಿಂತ ಧರೀ । ಅಪ । ದ್ವಂಧುವೆ ನೀ ಬೇಗ । ಬಂದೀಗಲೆನ್ನನು ॥೧॥ ವ್ಯೋಮಕೇಶ ನಿನ್ನ । ನಾಮ ವನುದಿನ । ನಾ ಮರೆಯೆ ಗುಣ । ಧಾಮ ಮುನಿಜನ । ಸ್ತೋಮವಂದ್ಯ ಬಿಲ್ವ । ಪ್ರೇಮಿಯೆ ರಿಪುಕುಲದಿ । ಭೀಮ ವಿರೂಪಾಕ್ಷ । ಕಾಮಾರಿ ನಂಬಿಡೆ ॥ ೨ ॥ ಕ್ಲೇಶಹರ ಜಗ । ದೀಶನು ತುರಗ । ನಾಶ ಭೂಷ ಗಣೇಶ ಪನ್ನಗ । ಶೇಷಶಾಯಿ ವೆಂಕ । ಟೇಶ ವಿಠಲಪ್ರಿಯರೀ । ದಾಸರ ಕಾಯ್ವ ಕೈ । ಲಾಸ ನಿವಾಸನೇ ॥ ೩ ॥

ವಿ. ಸೂ: ರುದ್ರನು ತಾಂಡವ ಪ್ರಿಯನೆಂದು ಸುಪ್ರಸಿದ್ಧವದೆ. ಈ ಪದ್ಯವು ಅಂತಹ ಕುಣಿತದ ಗಾಯನಕ್ಕೆ ತಕ್ಕುದಾದ ರಾಗ-ಶಬ್ದಗಳಿಂದ ಕೂಡಿ ಸೊಗಸಾಗಿದೆ. ಶಿವರಾತ್ರಿಯಲ್ಲಿ ಬಿಲ್ವದಳಗಳಿಂದ ಪೂಜಿಸಿದರೆ ಶಿವನಿಗೆ ಪ್ರೀತಿಯೆಂಬ ಪೌರಾಣಿಕ ಕತೆಯು ಇಲ್ಲಿಗೆ ಸರಿಕೆಯಾಗುವುದು

॥ ರಾಗ ಮುಖಾರಿ—ಝಂಪೆ ತಾಳ ॥

ಕಂಡುದನು ಪೇಳ್ವೆ ಬ್ರಹ್ಮಾಂಡನಾಯಕನೆ । ಕೊಂಡೆಯವಿದಲ್ಲ ಗ್ರಹ ಕುಂಡಲವ ಶೋಧಿಸುತ ॥ ಪ ॥ ಜಲಜಾಕ್ಷ ನಿನ್ನ ನಾಮಕೆ ಶ್ರವಣ ತಾರೆ ಕೋ । ಮಲ ದುಕರಲಗ್ನ ರಾಶಿಯು ಮಕರವು ॥ ಸಲೆ ಲಗ್ನದಲ್ಲಿರ್ಪ ಜಲತಾರಕೇಂದುದಶೆ । ಯಲಿ ನಿನಗೆ ಜಲದೊಳಾವಾಸವಾಯಿತು ಹರಿಯೆ. ॥೧॥ ಮನಃಮಥನ ತಾತ ಕೇಳಿನಸುತನು ಸಾಲ್ಮನೆಯ । ಮನೆಯೊಳಿರು ವನು ಲಗ್ನಕಧಿಪನೆನಿಸಿ ॥ ಮನದಿ ಯೋಚಿಸಲಿಕಾ ಶನಿದಶೆಯೊಳಾ ಕುಧರ । ವನು ಪೊತ್ತು ದಣಿದೆನೀ ವನಧಿಯೊಳು ಹರಿಯೆ ॥೨॥ ಮಂಗ

ಳನೆ ಸುಖಕಧಿಪ ಮಂಗಳನು ಸಿಂಗರದಿ । ಸಿಂಗರಾಶಿಯೊಳು ತಾ ಕಂಗೊಳಿಸುತ ॥ ತುಂಗವಿಕ್ರಮನವನೆ ಸಂಘಟಿಸಿದನು ವನದಿ । ಹಿಂಗದಲೆ ಬೇರು ಮೊಲುವಂಗವನು ಹರಿಯೇ ॥ ೩ ॥ ವಾರಿಜಾಸನ ಪಿತನೆ ಕ್ರೂರಕ್ಷೇತ್ರದಿ ರಾಹು । ಸಾರಿರ್ಪ ರಾಶಿ ವೃಶ್ಚಿಕವೆಣಿಸಲು । ಕಾರುಣಿಕನವನ ದಶೆಯಾರಂಭದಲಿ ನಿನಗೆ । ಘೋರರೂಪನ ತಾಳ್ದಾಯ್ತು ನರಹರಿಯೆ ॥ ೪ ॥ ಮಂದರೋದ್ಧರ ಕೇಳು ಚಂದಿರನ ರಾಶಿಗಾ । ನಂದದಧಿಪತಿ ಸೂರ್ಯನಂದನನು ತಾ । ನಿಂದು ಮೇಷದೊಳತ್ರಿಕಂದನ ನಿರೀಕ್ಷಿಸಲು । ಬಂದುದ್ಯೆ ಭಿಕ್ಷೆಯುದರಿಂದ ನಿನಗೆಲೆ ಹರಿಯೆ ॥ ೫ ॥ ಅಂಬುಜಾನನ ಕೇಳು ಒಂಬತ್ತರಧಿಪ ಶಶಿ । ಸಂಭವನು ಪಾಪದಿಂ ತುಂಬಿರ್ಪನು ॥ ಸಂಭವಿಸಲವನ ದಶೆಯಿಂದ ನೀ ಕ್ಷತ್ರಿಯ ಕ । ದಂಬ ಮರ್ದಿಸಿ ಧರ್ಮವಂ ಬಿಟ್ಟೆ ಹರಿಯೇ ॥ ೬ ॥ ಸಿರಿಯರಸ ಕೇಳಿನ್ನು ದುರಿತಸ್ಥಾನಾಧಿಪತಿ । ಗುರುವೇಳನೆಯ ಮನೆಯೊಳಿರುವನದರಿಂ ॥ ಹರಿಯುರುಪದೇಶದಿಂದಿರದೆ ಭಾರ್ಯೆಯನಗಲಿ । ಚರಿಸಿದೆಯರಣ್ಯದೊಳಗಿರುತ ನೀ ಹರಿಯೇ ॥ ೭ ॥ ಘೋರ ಪಾಪವಿನಾಶ ನಾರಿರಾಶಿಯು ನವಮ । ಕಾ ರವಿಯು ಸಾರಿ ನಿಂದಿರ್ಪನದರಿಂ ॥ ಚೋರ ವ್ಯಾಪಾರ ಪರನಾರಿಯರ ಕೂಡಿ ವ್ಯಭಿ । ಚಾರ ನಿನಗಾಯಿತು ರಮಾರಮಣ ಹರಿಯೇ ॥೮॥ ಜಾತವೃತ್ತಿರಹಿತ ತವ ಜಾತಕದಿ ತೋರುತಿಹ । ಕೇತು ಕೈವಲ್ಯ ತಾರಕನಾಥನು ॥ ಪೂತಬುದ್ಧಿ ಸ್ಥಾನವಾದನದರಿಂದಲಿಂ । ಭೂತಲದಿ ಸ್ಥಾಪಿಸಿದೆ ನೂತನ ಮತವ ಹರಿಯೆ ॥ ೯ ॥ ಪಾರವರ್ಜಿತ ಕವಿಯು ಸಾರಿರ್ಪ ದಶಮದೊಳ । ಗಾರವನಿಗೆಣೆಯುಂಟು ಧೀರನೆನಿಸಿ ॥ ಭೂರಿ ಮ್ಲೇಂಛರನು ಸಂಹಾರಗೈಯುತ ತೇಜಿ । ಯೇರಿ ಮೆರೆಯುತ್ತಿರುವ ನಾರಾಯಣ ಹರಿಯೇ ॥ ೧೦ ॥

ವಿ. ಸೂ: ಸೂರ್ಯ ಚಂದ್ರ ಮೊದಲಾದ ಗ್ರಹಗಳ ಚಾರಾದಿಫಲಗಳು ನಮ್ಮಂತಹ ಮಾನವರಿಗೆ ಮಾತ್ರವಲ್ಲ ದೇವದೇವನಾದ ಶ್ರೀಹರಿಗೂ ದೊರೆತಿವೆಯೆಂಬುದನ್ನು ಇಲ್ಲಿ ಕಾಣಬಹುದು. ಶ್ರೀರಾಮ, ಶ್ರೀಕೃಷ್ಣ, ರಾಮಕೃಷ್ಣ ಪರಮಹಂಸ, ಅರವಿಂದ ಘೋಷ, ವಿವೇಕಾನಂದ, ಜವಾಹರಲಾಲ ನೆಹರು, ವಿ. ಎಸ್. ಕೆ.ಯವರ ಜಾತಕದ ಪರಿಶೀಲನೆಯಿಂದ ತಿಳಿದ ಸತ್ಯ ಸಂಗತಿಗಳೇನೆಂದು ವಿದ್ವಾಂಸರು ಬರೆಯುತ್ತಾರೆ (ಈ ಬಗ್ಗೆ 'ಪ್ರಭಾತ' ವಾರ ಪತ್ರಿಕೆಯ ತಾ. 6—4 —58 ರ ಸಂಚಿಕೆ ನೋಡಬಹುದು). ಇಲ್ಲಿ ಒಂದೆ

ಡೆಗೆ ದೇವನ ಹತ್ತು ಅವತಾರಗಳ ಬಗೆಗೆ ಸಕಾರಣ ವಿವೇಚನೆ ಮಾಡಿದೆ. ಈ ರಾಹು-ಕೇತುಗಳ ಸಂಗತಿ ವಿಚಾರಣೀಯುವದೆ. 'ಬಪ್ಪುದು ತಪ್ಪದು' ಎಂಬುದಕ್ಕೆ ಬದಲು 'ಬಪ್ಪುದೇನೆಂ'ದು ತಿಳದು ತಕ್ಕ ನಡೆಯಬೇಕು.

## ೮. ಶ್ರೀ| ಬೋಳಾರ ವಾಸುದೇವಯ್ಯ ರಚಿತಗಳು

॥ ರಾಗ ನವರೋಜು—ಏಕತಾಳ ॥

ನಂಬಿದೆ ನಾ ತವ ಪದವ । ಯೆನ । ಗಿಂಬನು ಪಾಲಿಸು ದೇವ ॥ ಅಂಬುಧಿಶಯನ ಚಿ । ದಂಬರ ಮುರಹರ । ಬೆಂಬಿಡದೆನ್ನ ವಿ । ಶ್ವಂಭರ ಸಲಹೈ ॥ ೧ ॥ ಬಳಲಿದೆನೈ ಭವದಿಂದ । ಮಿಗೆ ತೊಳಲಿದೆ ಬೇಸರದಿಂದ ॥ ಕಳವಳಿಸುವೆನೀ । ಕೊಳಕು ಸಂಸಾರದಿ । ನಳಿನಾಕ್ಷನೆ ಸುಖ । ಗೊಳಿಸಿ ಪೊರೆವುದೈ ॥ ೨ ॥ ದುಷ್ಟರ ಸಂಘದಿ ಕೂಡಿ । ಸಂ । ಕಷ್ಟವಿದ್ದೈ ದಯ ಮಾಡಿ ॥ ಸೃಷ್ಟಿಗೊಡೆಯನೆ । ನ್ನಿಷ್ಟವನೀಯುತ । ಶಿಷ್ಟನ ಕಾಯೊ ವಸಿಷ್ಠ ವಿನುತ ಪದ ॥ ೩ ॥ ದಣಿದೆನು ದಾರಿದ್ರ್ಯದಲಿ । ನೆರ । ವಣಿಗೆಯು ಗೈವರಲ್ಲಿ (ರಿಲ್ಲ) ॥ ಗುಣನಿಧಿ ತವ ದಯ । ಪೊಣಗಿದ ಮಾತ್ರಕೆ । ತೃಣ ಸಮವೆನ್ನ ನಾ । ರಣಿಕೆಯು ಗೈವರು ॥ ೪ ॥ ದೇವನೆ ನಿನ್ನಡಿಯುಗದ । ಸ । ದ್ಭಾವನೆಯಂ ನೀಯೊ ಸದಾ ॥ ಕಾವವ ನೀನೆಂ । ದೋವಿ ನುತಿಸುವೆನು । ಶ್ರೀ ವಾಸುದೇವ ದಾಮೋದರ ವಿಠಲ ॥ ೫ ॥

ವಿ. ಸೂ: ಮನಸ್ಸಿನ ಕಳವಳವು ಮಾತಿನಲ್ಲಿ ಮೂಡಿ ಬರುವಾಗಣ ವ್ಯದು ಧ್ವನಿಯುಳ್ಳ ಈ ಪದ್ಯವು ಭಕ್ತನು ದೇವನನ್ನು ಕೂಗುವುದಕ್ಕೆ ಅನುವಾಗಿದೆ. ಭವದಿಂದಲೂ, ದುಷ್ಟರಿಂದಲೂ, ದಾರಿದ್ರ್ಯದಿಂದಲೂ ಬಳಲಿದವರು ಹರಿದಾಸರ ಈ ವಾಣಿಯಿಂದ ಮೊರೆಯಿಡುವುದು ಲೇಸಾದುದು!

॥ ರಾಗ ಪೂರ್ವಿ ಕಲ್ಯಾಣಿ—ಆದಿತಾಳ ॥

ಶ್ರೀ ಮುರವೈರಿಗೆ ಮಂಗಲಂ । ಜಯ ಮಂಗಲಂ ॥ ಪ. ॥ ವೇದ ವ್ಯಾಪಕನಿಗೆ । ಸಾಧುಗಳೊಡೆಯಗೆ ॥ ರಾಧೆಯೊಲ್ಲಭ ಜಗ । ದಾದಿ ನಾಯಕನಿಗೆ ॥ ೧ ॥ ಸಾರಸನಾಭಗೆ । ನಾರದ ವಿನುತಗೆ ॥ ಮಾರಜನಕನಿಗೆ ಶ್ರೀರಾಮಚಂದ್ರಗೆ ॥ ೨ ॥ ಸಾಮಜವರದಗೆ । ಕಾಮಿತದಾತಗೆ । ಭೀಮ ವಿಕ್ರಮಿ ರಂಗ । ಧಾಮ ಮುಕುಂದಗೆ ॥ ೩ ॥ ಭಾವಿಕೋದ್ಧಾರಗೆ । ದೇವಕೀತನಯಗೆ ॥ ಶ್ರೀ ವಾಸುದೇವ ದಾ । ಮೋದರ ಶಾರ್ಙ್ಗಿಗೆ ॥ ೪ ॥

॥ ಮಂಗಲಮ್ ॥

--------

Edited, Printed & Published by K. V. Shenoy
at The Prabhat Printers, Ltd., Mangalore.